

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಕೆ.ಟಿ ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1042 (816)

ಉತ್ತರಿಸಬೇಕಾದ ದಿನಾಂಕ : 10.03.2021.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

<table>
<tr><th>ಕ್ರಸಂ</th><th></th><th>ಉತ್ತರಗಳು</th></tr>
<tr><td>ಅ</td><td>ರಾಜ್ಯದಲ್ಲಿ ಜಾನುವಾರು ಗಣತಿಯನ್ನು ಯಾವಾಗ ಮಾಡಲಾಗಿದೆ. (ವಿವರ ನೀಡುವುದು).</td><td>ರಾಜ್ಯದಲ್ಲಿ 20ನೇ ಜಾನುವಾರು ಗಣತಿಯನ್ನು ಪ್ರತಿ 5 ವರ್ಷಗಳಿಗೊಮ್ಮೆ ಕೈಗೊಳ್ಳಲಾಗುತ್ತಿದ್ದು, ಕೇಂದ್ರ ಸರ್ಕಾರದ ಮಾರ್ಗದರ್ಶನದನ್ವಯ 20 ನೇ ಜಾನುವಾರು ಗಣತಿಯನ್ನು 2019 ರಲ್ಲಿ ನಡೆಸಲಾಗಿದೆ. ಜಾನುವಾರುಗಳ ಮಾಹಿತಿಯು ಈ ಕೆಳಕಂಡಂತಿರುತ್ತದೆ.<br><table><tr><th>ಕ್ರಸಂ</th><th>ವಿವರ</th><th>ಸಂಖ್ಯೆ</th></tr><tr><td>1</td><td>ದನಗಳು</td><td>8469004</td></tr><tr><td>2</td><td>ಎಮ್ಮೆಗಳು</td><td>2984560</td></tr><tr><td>3</td><td>ಕುರಿಗಳು</td><td>11050728</td></tr><tr><td>4</td><td>ಮೇಕೆಗಳು</td><td>6169392</td></tr><tr><td>5</td><td>ಹಂದಿಗಳು</td><td>323836</td></tr><tr><td>6</td><td>ಇತರೆ*</td><td>1333956</td></tr><tr><td>7</td><td>ಒಟ್ಟು ಜಾನುವಾರುಗಳು</td><td>30331476</td></tr><tr><td>8</td><td>ಕುಕ್ಕುಟಗಳು</td><td>59494481</td></tr></table>(*ಕುದುರೆಗಳು ಮತ್ತು ಸಣ್ಣ ಕುದುರೆಗಳು, ಹೇಸರಗತ್ತೆಗಳು, ಕತ್ತೆಗಳು, ಒಂಟೆಗಳು, ನಾಯಿಗಳು, ಮೊಲಗಳು ಮತ್ತು ಆನೆಗಳು).</td></tr>
<tr><td>ಆ</td><td>ಹೊಸ ಜಾನುವಾರು ಸಂಖ್ಯೆಗೆ ಅನುಗುಣವಾಗಿ ಹೆಚ್ಚುವರಿಯಾಗಿ ಬೇಕಾಗಿರುವ ಆಸ್ಪತ್ರೆಗಳನ್ನು ಮಂಜೂರು ಮಾಡಲಾಗಿದೆಯೇ;</td><td>ಈಗಾಗಲೇ ಜಾನುವಾರುಗಳ ಸಂಖ್ಯೆಗೆ ಅನುಗುಣವಾಗಿ ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದು, ಹೆಚ್ಚುವರಿಯಾಗಿ ಆಸ್ಪತ್ರೆಗಳ ಮಂಜೂರಾತಿಯ ಅವಶ್ಯಕತೆ ಇರುವುದಿಲ್ಲ.</td></tr>
</table>

| | | |
|---|---|---|
| ಇ | ಈ ಆಸ್ಪತ್ರೆಗಳಲ್ಲಿ ವೈದ್ಯರ ನೇಮಕಾತಿ ಮಾಡುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಲ್ಲಿ ಖಾಲಿ ಇರುವ ಮುಖ್ಯ ಪಶುವೈದ್ಯಾಧಿಕಾರಿ (ಆಡಳಿತ) ಹಾಗೂ ಮುಖ್ಯ ಪಶುವೈದ್ಯಾಧಿಕಾರಿ ಮತ್ತು ಹಿರಿಯ ಪಶುವೈದ್ಯಾಧಿಕಾರಿಗಳ ಖಾಲಿ ಹುದ್ದೆಗಳನ್ನು ಹಂತ ಹಂತವಾಗಿ ಪಶುವೈದ್ಯಾಧಿಕಾರಿ ಹುದ್ದೆಯಿಂದ ಕಾಲಮಿತಿ ಪದೋನ್ನತಿ/ಮುಂಬಡ್ತಿ ಮುಖಾಂತರ ತುಂಬಲು ಕ್ರಮವಹಿಸಲಾಗಿದೆ.<br><br>ಹಾಗೆಯೇ, ಇಲಾಖೆಯಲ್ಲಿ ಖಾಲಿ ಇರುವ 639 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ನಿಯಮಗಳ ಮುಖಾಂತರ ಭರ್ತಿ ಮಾಡುವ ಪ್ರಸ್ತಾವನೆಗೆ ಪ್ರಸ್ತುತ ಆರ್ಥಿಕ ನಿರ್ಬಂಧಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿರುವುದಿಲ್ಲ.<br>ಆದುದರಿಂದ, ಆರ್ಥಿಕ ಇಲಾಖೆಯ ಮುಂದಿನ ಆದೇಶದವರೆಗೂ ಸದರಿ ನೇಮಕಾತಿ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ಮುಂದೂಡಲಾಗಿರುತ್ತದೆ.<br><br>ಮುಂದುವರೆದು, ಕಲ್ಯಾಣ ಕರ್ನಾಟಕ ಭಾಗಕ್ಕೆ ಸಂಬಂಧಿಸಿದಂತೆ ಅನುಚ್ಛೇಧ 371 (ಜೆ) ರಡಿ ಕಲ್ಯಾಣ ಕರ್ನಾಟಕ ಭಾಗದಲ್ಲಿ ಖಾಲಿ ಇರುವ 61 ಪಶುವೈದ್ಯಾಧಿಕಾರಿ ಹುದ್ದೆಗಳನ್ನು, 32 ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗಳನ್ನು, 83 ಪಶುವೈದ್ಯಕೀಯ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ. ಆದರೆ, ದಿನಾಂಕ:06.07.2020 ರ ಸುತ್ತೋಲೆಯಲ್ಲಿ ಆರ್ಥಿಕ ಇಲಾಖೆಯು ಆರ್ಥಿಕ ನಿರ್ಬಂಧಗಳ ಹಿನ್ನೆಲೆಯಲ್ಲಿ 2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಕಲ್ಯಾಣ-ಕರ್ನಾಟಕ ಭಾಗದ ಹುದ್ದೆಗಳು ಹಾಗೂ ಬ್ಯಾಕ್ ಲಾಗ್ ಹುದ್ದೆಗಳು ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯುವಂತೆ ತಿಳಿಸಿದರ ಹಿನ್ನೆಲೆಯಲ್ಲಿ ಸದರಿ ನೇಮಕಾತಿ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿತ್ತು.<br><br>ಪ್ರಸ್ತುತ ದಿನಾಂಕ:24.02.2021 ರಲ್ಲಿ ಆರ್ಥಿಕ ಇಲಾಖೆಯು ನೇಮಕಾತಿ ಪೂರ್ವ ಪ್ರಕ್ರಿಯೆಗಳನ್ನು ಮುಂದುವರೆಸಲು ಸಹಮತಿ ನೀಡಿದ್ದು, ಅದರಂತೆ, ನೇಮಕಾತಿ ಪೂರ್ವ ಪ್ರಕ್ರಿಯೆಗಳನ್ನು ಪ್ರಾರಂಭಿಸಲು ಕ್ರಮಕೈಗೊಳ್ಳಲಾಗುತ್ತಿದೆ. |
| ಈ | ಯಾವಾಗ ನೇಮಕಾತಿ ಮಾಡಲಾಗುವುದು? | |

**ಪಸಂಮೀ ಇ-75 ಸಲೆವಿ 2021**

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು